


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 23-03-2021 ಪ್ರಶ್ನೆ ಸಂಖ್ಯೆ : 1640(1929)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಮರಿತಿಬ್ಬೇಗೌಡ(ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 23-03-2021

ಉತ್ತರಿಸುವ ಸಚಿವರು: ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು

ವಿಷಯ : ಕೋಲಾರ ನಗರ ಸಭೆಯಲ್ಲಿನ ಹಿಂದಿನ ಪೌರಾಯುಕ್ತ/ನೌಕರರು ಇಲಾಖಾ ವಿಚಾರಣೆ ಕೈಗೊಂಡ ನಂತರ ನಿಧನ ಹೊಂದಿದಲ್ಲಿ ಸೌಲಭ್ಯ ಕಲ್ಪಿಸುವ ಬಗ್ಗೆ

(ಅ) ನಗರ ಸಭೆಗಳಲ್ಲಿ ಪೌರಾಯುಕ್ತರ ಹುದ್ದೆಯಂತಹ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿರುವ ಹಾಗೂ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ / ನೌಕರರುಗಳಿಂದ ಆರ್ಥಿಕ ನಷ್ಟುವುಂಟಾದಾಗ ಅವರುಗಳ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(2)ರ ಪ್ರಕಾರ ಆ ಅಧಿಕಾರಿ/ನೌಕರರು ನಿಧನ ಹೊಂದಿದ ನಂತರವೂ ಅವರ ಮೇಲೆ ವಿಚಾರಣೆ ನಡೆಸಲು ಅವಕಾಶವಿದೆಯೇ;

(ಆ) ಹಾಗಿದ್ದಲ್ಲಿ, ಕೋಲಾರ ನಗರ ಸಭೆಗೆ ಸಂಬಂಧಿಸಿದಂತೆ ಪೌರಾಯುಕ್ತರು ಹಾಗೂ ಇತರೆ ಅಧಿಕಾರಿಗಳು ಆರ್ಥಿಕ ನಷ್ಟ ಉಂಟು ಮಾಡಿದ್ದಾರೆಂದು ತಿಳಿಸಿ, ಅವರುಗಳ ಮೇಲೆ ಇಲಾಖಾ ವಿಚಾರಣೆ ಕೈಗೊಂಡ ನಂತರ ಅವರಲ್ಲಿ ಯಾರಾದರೂ ನಿಧನ ಹೊಂದಿದ್ದಲ್ಲಿ, ಅಂತಹ ಅಧಿಕಾರಿಗಳ ಮೇಲೆ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆಯೇ; (ವಿವರಗಳನ್ನು ನೀಡುವುದು)

(ಇ) ಕೋಲಾರ ನಗರಸಭೆಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಗೆ ಒಳಪಟ್ಟ ಪೌರಾಯುಕ್ತರು/ಅಧಿಕಾರಿಗಳು ನಿಧನ ಹೊಂದಿದ ನಂತರ ಅವರ ಕುಟುಂಬಕ್ಕೆ ಎಲ್ಲಾ ಸೌಲಭ್ಯಗಳನ್ನು ನೀಡಲಾಗಿದೆಯೇ; (ವಿವರಗಳನ್ನು ನೀಡುವುದು)

(ಈ) ಇಲ್ಲದಿದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು;

(ಉ) ಕೋಲಾರ ನಗರ ಸಭೆಯಲ್ಲಿ ಈ ಹಿಂದೆ ನಿಯೋಜನೆ ಮೇರೆಗೆ ಪೌರಾಯುಕ್ತರಾಗಿ/ನೌಕರರಾಗಿ ಕಾರ್ಯನಿರ್ವಹಿಸಿದವರು ನಿಧನ ಹೊಂದಿದ್ದಲ್ಲಿ, ಅವರ ಕುಟುಂಬದವರಿಗೆ ಆರ್ಥಿಕ ಸೌಲಭ್ಯ ಬಿಡುಗಡೆ ಮಾಡುವ ಸಲುವಾಗಿ ಕೋಲಾರ ನಗರ ಸಭೆಯಿಂದ ಅವರ ಮಾತೃ ಇಲಾಖೆಗೆ ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿದೆಯೇ; ಇದ್ದಲ್ಲಿ, ವಿವರಗಳನ್ನು ಒದಗಿಸುವುದು;

(ಊ) ಇಲ್ಲದಿದ್ದಲ್ಲಿ, ಸದರಿ ವಿಳಂಬಕ್ಕೆ ಕಾರಣಗಳೇನು? (ವಿವರಗಳನ್ನು ನೀಡುವುದು)